## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 610
2.. ಸದಸ್ಯರ ಹೆಸರು : ಶ್ರೀ ಕೆ. ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 24-09-2020
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರ ಬೈಯಪ್ಪನಹಳ್ಳಿ ರೈಲು ನಿಲ್ದಾಣದಲ್ಲಿ ನಿರ್ಮಿಸಲಾಗಿದ್ದ ಟರ್ಮಿನಲ್ ಸ್ಟೇಷನ್‌ಗೆ ಹೋಗುವ ರಸ್ತೆಗಳು ಅತಿ ಚಿಕ್ಕದಾಗಿದ್ದು ಹಾಗೂ ಅಭಿವೃದ್ಧಿಯೂ ಆಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ನಗರದ ಬೈಯಪ್ಪನಹಳ್ಳಿ ರೈಲು ನಿಲ್ದಾಣದಲ್ಲಿ ನಿರ್ಮಿಸಲಾಗುತ್ತಿರುವ ಟರ್ಮಿನಲ್ ಸ್ಟೇಷನ್‌ಗೆ ಹೋಗುವ ರಸ್ತೆಗಳು ಅತಿ ಚಿಕ್ಕದಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಇದರಿಂದಾಗಿ ಇಂದಿರಾನಗರ, ಕೆ.ಆರ್.ಪುರಂ, ದೊಮ್ಮಲೂರು, ಕೋರಮಂಗಲ, ರಾಮಮೂರ್ತಿನಗರ, ಮಾರುತಿಸೇವಾನಗರ ಮುಂತಾದ ಬಡಾವಣೆಗಳ ಪ್ರಯಾಣಿಕರು ಅತಿ ಚಿಕ್ಕ ಹಾಗೂ ಮಣ್ಣಿನಿಂದ ಕೂಡಿದ ಕುಲುಕುವ ರಸ್ತೆಗಳಲ್ಲಿ ಕಷ್ಟಕರವಾಗಿ ಪ್ರಯಾಣಿಸಿ, ಸದರಿ ಟರ್ಮಿನಲ್ ಅನ್ನು ತಲುಪಬೇಕಾಗಿದ್ದು, ಇದರಿಂದ ಟ್ರಾಫಿಕ್ ಜಾಮ್ ಧೂಳು ಸೇವನೆ ಮುಂತಾದ ಅನಾನುಕೂಲಗಳನ್ನು ಪ್ರಯಾಣಿಕರು ಎದುರಿಸಬೇಕಾಗಿರು ವುದರಿಂದ ಈ ಪ್ರಯಾಣಿಕರ ಭವಣೆಯನ್ನು ನಿವಾರಿಸಲು ಸರ್ಕಾರ ತೆಗೆದುಕೊಳ್ಳುವ ಯೋಜನೆಗಳೇನು? | ಬೈಯಪ್ಪನಹಳ್ಳಿ ರೈಲ್ವೆ ನಿಲ್ದಾಣ ಕಾಮಗಾರಿ ಮುಕ್ತಾಯದ ನಂತರ ಭವಿಷ್ಯದಲ್ಲಿ ಉಂಟಾಗುವ ಸಂಚಾರ ದಟ್ಟಣೆಯನ್ನು ನಿಯಂತ್ರಿಸಲು ರಸ್ತೆ ಅಗಲೀಕರಣ, ಆರ್‌ಯುಬಿ ಮತ್ತು ಆರ್‌ಓಬಿ ನಿರ್ಮಿಸುವ ಬಗ್ಗೆ ಈ ಕೆಳಕಂಡ ಪ್ರಸ್ತಾವನೆಗಳು ಇರುತ್ತವೆ.<br>1. ಬೈಯಪ್ಪನಹಳ್ಳಿ ರಸ್ತೆ (ರೈಲ್ವೆ ಸಮಾನಾಂತರ ರಸ್ತೆ) ಯನ್ನು ಪರಿಷ್ಕೃತ ಮಹಾನಕ್ಷೆ 2015ರಲ್ಲಿ 24.00 ಮೀಟರ್ ಅಗಲಕ್ಕೆ ಅಗಲೀಕರಣಗೊಳಿಸಲು ಪ್ರಸ್ತಾಪಿಸಲಾಗಿರುತ್ತದೆ.<br>2. ಮಾರುತಿಸೇವಾನಗರ ವ್ಯಾಪ್ತಿಯಲ್ಲಿ ಹಾಲಿ ಇರುವ ಐಓಸಿ ಬಾಣಸವಾಡಿ ರೈಲ್ವೆ ಮೇಲು ಸೇತುವೆಗೆ ಹೆಚ್ಚುವರಿ ಲೇನ್ ನಿರ್ಮಿಸುವುದು, ಬೈಯಪ್ಪನಹಳ್ಳಿ ಕಡೆಗೆ ಹೆಚ್ಚುವರಿ ಲೂಪ್ ನಿರ್ಮಿಸುವುದು ಮತ್ತು ಐಓಸಿ ಜಂಕ್ಷನ್‌ನಲ್ಲಿ ರೈಲ್ವೆ ಕೆಳ ಸೇತುವೆಗಳನ್ನು ನೈರುತ್ಯ ರೈಲ್ವೆ ಇಲಾಖೆಯ ಸಹಯೋಗದಲ್ಲಿ ನಿರ್ಮಿಸಲು ಉದ್ದೇಶಿಸಿದ್ದು, ಸರ್ಕಾರದಿಂದ 2016-17 ಮತ್ತು 2017-18ನೇ ಸಾಲಿನ ನಗರೋತ್ಥಾನ ಲೆಕ್ಕ ಶೀರ್ಷಿಕೆ ಅಡಿ ರೂ.40.00 ಕೋಟಿಗಳ ಅನುದಾನ ಅನುಮೋದನೆಯಾಗಿರುತ್ತದೆ.<br>ಬೈಯಪ್ಪನಹಳ್ಳಿ ರಸ್ತೆ (ರೈಲ್ವೆ ಸಮಾನಾಂತರ ರಸ್ತೆ) ಯನ್ನು ಪ್ರಸ್ತುತ ನೈರುತ್ಯ ರೈಲ್ವೆ ಇಲಾಖೆಯೇ ತಮ್ಮ ಸ್ವಂತ (ರೈಲ್ವೆ ಇಲಾಖೆಯ) ಜಾಗವನ್ನು ಉಪಯೋಗಿಸಿಕೊಂಡು ಎರಡು ಪಥದ ರಸ್ತೆಯನ್ನು ಅಭಿವೃದ್ಧಿಪಡಿಸುತ್ತಿದೆ. |

| | | |
|---|---|---|
| | | ಮಾರುತಿಸೇವಾನಗರ ವ್ಯಾಪ್ತಿಯಲ್ಲಿ ಹಾಲಿ ಇರುವ ಐಓಸಿ ಬಾಣಸವಾಡಿ ರೈಲ್ವೆ ಮೇಲುಸೇತುವೆಗೆ ಹೆಚ್ಚುವರಿ ಲೇನ್ ನಿರ್ಮಿಸುವುದು, ಬೈಯಪ್ಪನಹಳ್ಳಿ ಕಡೆಗೆ ಹೆಚ್ಚುವರಿ ಲೂಪ್ ನಿರ್ಮಿಸುವುದು ಮತ್ತು ಐಓಸಿ ಜಂಕ್ಷನ್‌ನಲ್ಲಿ ರೈಲ್ವೆ ಕೆಳಸೇತುವೆಗಳನ್ನು ನೈರುತ್ಯ ರೈಲ್ವೆ ಇಲಾಖೆಯ ಸಹಯೋಗದಲ್ಲಿ ನಿರ್ಮಿಸಲು ಪ್ರಸ್ತುತ ರೈಲ್ವೆ ಇಲಾಖೆಗೆ ರೂ.16.72 ಕೋಟಿಗಳನ್ನು ದಿನಾಂಕ: 27-02-2017 ರಂದು ಪಾವತಿಸಿದ್ದು, ರೈಲ್ವೆ ಮೇಲು / ಕೆಳಸೇತುವೆ ಮತ್ತು ಹೆಚ್ಚುವರಿ ಲೂಪ್ ನಿರ್ಮಾಣಕ್ಕೆ ಅವಶ್ಯವಿರುವ ರಕ್ಷಣಾ ಇಲಾಖೆಯ ಸ್ವತ್ತನ್ನು ಪಾಲಿಕೆಗೆ ಹಸ್ತಾಂತರಿಸಿಕೊಂಡಿದ್ದು, ಅವಶ್ಯವಿರುವ ಖಾಸಗಿ ಸ್ವತ್ತುಗಳ ಭೂಸ್ವಾಧೀನಕ್ಕೆ ನೂತನ ಟಿ.ಡಿ.ಆರ್. ನಿಯಮಾವಳಿಯನ್ವಯ ನಮೂನೆ-1ರಲ್ಲಿ ಅಧಿಸೂಚನೆ ಪ್ರಕಟಿಸಿದ್ದು, ಭೂಸ್ವಾಧೀನ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.<br><br>ದಿನಾಂಕ: 28-08-2020 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನೈರುತ್ಯ ರೈಲ್ವೆ ಇಲಾಖೆಯ ಮತ್ತು ಪಾಲಿಕೆಯ ಅಧಿಕಾರಿಗಳೊಂದಿಗೆ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ ಜಂಟಿ ತಪಾಸಣೆ ಕೈಗೊಂಡು ರಸ್ತೆ ಅಭಿವೃದ್ಧಿಪಡಿಸುವ ಬಗ್ಗೆ ಕ್ರಿಯಾಯೋಜನೆ ತಯಾರಿಸಲು ನಿರ್ಣಯಿಸಲಾಗಿರುತ್ತದೆ.<br><br>ಮುಂದುವರೆದು, ಇತರೆ ರಸ್ತೆ ಅಗಲೀಕರಣ ಯೋಜನೆಗಳ ಪ್ರಕರಣಗಳಲ್ಲಿ ಖಾಸಗಿ ಸ್ವತ್ತಿನ ಮಾಲೀಕರು ಟಿ.ಡಿ.ಆರ್. ಅನ್ವಯ ಭೂಸ್ವಾಧೀನಕ್ಕೆ ಒಪ್ಪಿಗೆ ನೀಡದಿರುವುದರಿಂದ ಮತ್ತು ಮೆಟ್ರೋ ಯೋಜನೆಯಲ್ಲಿ ನೀಡಲಾಗುತ್ತಿರುವಂತೆ ಹಣದ ರೂಪದಲ್ಲಿ ಭೂಪರಿಹಾರ ನೀಡಲು ಬೇಡಿಕೆ ಇಡುತ್ತಿರುವುದರಿಂದ, ಬೈಯಪ್ಪನಹಳ್ಳಿ ರಸ್ತೆ (ರೈಲ್ವೆ ಸಮಾನಾಂತರ ರಸ್ತೆ) ಯನ್ನು ಪರಿಷ್ಕೃತ ಮಹಾನಕ್ಷೆ 2015 ರಂತೆ 24.00 ಮೀಟರ್ ಅಗಲಕ್ಕೆ ಅಗಲೀಕರಣಗೊಳಿಸುವ ಯೋಜನೆಯನ್ನು ಭೂಸ್ವಾಧೀನ ಪ್ರಕ್ರಿಯೆ ಕೈಗೊಂಡ ನಂತರ ರಸ್ತೆ ಅಗಲೀಕರಣ ಕಾಮಗಾರಿ ಕೈಗೊಳ್ಳಲು ಕ್ರಮವಹಿಸಲಾಗುತ್ತದೆ. |

ಸಂಖ್ಯೆ: ನಅಇ 194 ಎಂಎಸ್‌ವೈ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ